ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಮಂಗಳವಾರ, ಜನವರಿ ೮, ೨೦೧೩ (ಪುಷ್ಯ ೧೮, ಶಕ ವರ್ಷ ೧೯೩೪) | ನಂ. ೧೯ |
|---|---|---|
| ***Part – IV-A*** | ***Bangalore, Tuesday, January 8, 2013 (Pushya 18, Shaka Varsha 1934)*** | ***No. 19*** |


***TRANSPORT SECRETARIAT***

***NOTIFICATION***

***No. SARIE 06 SAENI 2011, Bangalore, Dated: 07-01-2013***

In exercise of the powers conferred by sub-section (1) of section 16 of the Karnataka Motor Vehicles Taxation Act, 1957 (Karnataka Act 35 of 1957) the Government of Karnataka, hereby exempts the tax payable as specified in column (4) of the table below, by M/s Hindustan Aeronautics Limited, Bangalore in respect the vehicles mentioned in column (2) thereof for the period specified in the corresponding entries at column (3) excluding the amount of tax of Rs.11,50,000/- (Rupees Eleven Lakhs fifty thousand only) which has already been paid in this regard as per the orders of the Hon'ble High Court of Karnataka in W.P. No. 33099-33108/2010 dated: 25.10.2010.

***TABLE***

| ***Sl. No.*** | ***Motor Vehicle Numbers*** | ***Period for which tax is due*** | ***Amount of tax due in Rs.*** |
|---|---|---|---|
| ***(1)*** | ***(2)*** | ***(3)*** | ***(4)*** |
| 1. | CAP 6280 | 01.12.2007 TO 28.02.2010 | 1,64,655=00 |
| 2. | CAN 6041 | 01.12.2007 TO 31.05.2010 | 2,68,862=00 |
| 3. | CAN 7597 | 01.12.2007 TO 31.05.2010 | 2,68,862=00 |
| 4. | CAN 7599 | 01.12.2007 TO 31.05.2010 | 2,68,862=00 |
| 5. | CAN 7594 | 01.12.2007 TO 31.05.2010 | 2,68,862.00 |
| 6. | CAN 640 | (a) 01.10.2007 TO 31.12.2007<br>(b) 1.4.2008 TO 31.3.2010 | 25,773=00<br>4,78,350=00 |
| 7. | CAY 6403 | (a) 1.10.2007 TO 31.12.2007<br>(b) 1.04.2008 TO 31.3.2010 | 25,773=00<br>4,78,350=00 |
| 8. | CAY 6404 | (a) 1.10.2007 TO 31.12.2007<br>(b) 1.04.2008 TO 31.3.2010 | 25,773=00<br>4,78,350=00 |
| 9. | CAY 6405 | (a) 1.10.2007 TO 31.12.2007<br>(b) 1.04.2008 TO 31.3.2010 | 25,773=00<br>4,78,350=00 |
| ***Total Tax Due*** | | | ***32,56,595=00*** |
| Tax already paid by HAL as per the orders of Hon'ble High Court of Karnataka in WP NO: 33099-33108/2010 | | | 11,50,000=00 |
| ***Net tax exempted*** | | | ***21,06,595=00*** |

By Order and in the name of the Governor of Karnataka,

***K.BEERESH***
Under Secretary to Government,
Transport Department

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೦ |
|---|---|---|
| Part – IV-A | Bangalore, Wednesday, January 9, 2013 (Pushya 19, Shaka Varsha 1934) | No. 20 |


## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 23 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09–01–2013

ಕರ್ನಾಟಕ ರಾಜ್ಯಾದ್ಯಂತ "ಪಲ್ಪ್ ಪೇಪರ್, ಕಾರ್ಡ್‌ಬೋರ್ಡ್, ಸ್ಟ್ರಾಬೋರ್ಡ್ ನ್ಯೂಸ್ ಪ್ರಿಂಟ್" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2–8–2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ / ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಸ್ವೀಕರಿಸಲಾದ ಸಲಹೆ / ಆಕ್ಷೇಪಣೆಗಳನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ "ಪಲ್ಪ್ ಪೇಪರ್, ಕಾರ್ಡ್‌ಬೋರ್ಡ್, ಸ್ಟ್ರಾಬೋರ್ಡ್ ನ್ಯೂಸ್ ಪ್ರಿಂಟ್" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

### ಅನುಸೂಚಿ

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ – 1 | | ವಲಯ – 2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 1 | 2 | 3 | 4 | 5 | 6 |
| **ಅತಿ ಕುಶಲ** | | | | | |
| 1 | ಸೂಪರ್ ವೈಸರ್ | 225–00 | 5850–00 | 205–00 | 5330–00 |
| 2 | ಶಿಫ್ಟ್ ಇನ್‌ಚಾರ್ಜ್ | | | | |
| 3 | ಫೋರ್ ಮನ್ | | | | |
| **ಕುಶಲ** | | | | | |
| 1 | ಫಿಟ್ಟರ್ | 205–00 | 5330–00 | 195–00 | 5070–00 |
| 2 | ರಿವೈಂಡಿಂಗ್ ಆಪರೇಟರ್ | | | | |
| 3 | ಬಾಯ್ಲರ್ ಆಪರೇಟರ್ | | | | |
| 4 | ಪಲ್ಪ್ ಮಿಲ್ಕ್ ಆಪರೇಟರ್ | 205–00 | 5330–00 | 195–00 | 5070–00 |
| 5 | ಮೆಶಿನ್ ಆಪರೇಟರ್ | | | | |
| 6 | ಟರ್ನರ್ | | | | |
| 7 | ಎಲೆಕ್ಟ್ರೀಷಿಯನ್ | | | | |
| 8 | ಕಾರ್ಪೆಂಟರ್ | | | | |
| **ಅರೆ ಕುಶಲ** | | | | | |
| 1 | ಮೌಲ್ಡ್ ಆಪರೇಟರ್ | 190–00 | 4940–00 | 180–00 | 4680–00 |
| 2 | ರಿವೈಂಡಿಂಗ್ ಮಜ್ದೂರ್ | | | | |
| 3 | ಪಂಪ್ ಅಟೆಂಡರ್ | | | | |
| 4 | ಅಸಿಸ್ಟೆಂಟ್ ಅಪರೇಟರ್ | | | | |
| **ವಾಹನ ಚಾಲಕರು** | | | | | |
| 1 | ಲಾರಿ ಚಾಲಕ | 220–00 | 5720–00 | 210–00 | 5460–00 |
| 2 | ಜೀಪ್ ಮತ್ತು ಕಾರು ಚಾಲಕ | 200–00 | 5200–00 | 190–00 | 4940–00 |

| ಕ್ರ ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ – 1 | | ವಲಯ – 2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 1 | 2 | 3 | 4 | 5 | 6 |
| **ಕುಶಲರಲ್ಲದವರು** | | | | | |
| 1 | ಆಯಿಲ್ ಮೆನ್ | 185–00 | 4810–00 | 170–00 | 4420–00 |
| 2 | ಸೆಟ್ಟರ್ ಮಜ್ದೂರ್ | | | | |
| 3 | ಹೆಲ್ಪರ್ | | | | |
| 4 | ಬಾಯ್ಲರ್ ಮಜ್ದೂರ್ | | | | |
| 5 | ಮೇಲೆ ತಿಳಿಸಿರುವ ಯಾವುದೇ ಕುಶಲರಲ್ಲದ ಕಾರ್ಮಿಕರು | | | | |
| **ಕಛೇರಿ ಸಿಬ್ಬಂದಿ** | | | | | |
| 1 | ಮ್ಯಾನೇಜರ್/ಪರ್ಸನಲ್ ಆಫೀಸರ್ | 243–84 | 6339–00 | 224–61 | 5879–99 |
| 2 | ಅಸಿಸ್ಟೆಂಟ್ ಮ್ಯಾನೇಜರ್ / ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 235–00 | 6110–00 | 215–76 | 5610–00 |
| 3 | ಅಕೌಟೆಂಟ್ | 225–00 | 5850–00 | 205–76 | 5350–00 |
| 4 | ಕ್ಯಾಷಿಯರ್ | 220–00 | 5720–00 | 200–76 | 5220–00 |
| 5 | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್ | | | | |
| 6 | ಸ್ಟೋರ್ ಕೀಪರ್ | | | | |
| 7 | ಬೆರಳಚ್ಚುಗಾರ / ಡಾಟಾಎಂಟ್ರಿ ಆಪರೇಟರ್ | 215–00 | 5590–00 | 195–76 | 5090–00 |
| 8 | ಗುಮಾಸ್ತ / ಕ್ಲರ್ಕ್ | | | | |
| 9 | ಆಫೀಸ್‌ಬಾಯ್ / ಪ್ಯೂನ್ / ವಾಚ್‌ಮನ್ / ಅಟೆಂಡರ್ | 175–00 | 4550–00 | 165–00 | 4290–00 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.}}{26}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ

ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

12. ಅತಿ ಕುಶಲ : ಅತಿ ಕುಶಲ ಕೆಲಸಗಾರರು ಎಂದರೆ ಯಾರು ಹೆಚ್ಚಿನ ನೈಪುಣ್ಯತೆಯ ಕೆಲಸವನ್ನು ಅತಿ ಹೆಚ್ಚು ನಿಖರವಾಗಿ ಮಾಡಬಲ್ಲವರಾಗಿದ್ದು, ನಕ್ಷೆಯನ್ನು ಓದಬಲ್ಲ ಮತ್ತು ಅದರ ಆಧಾರದ ಮೇಲೆ ಕೆಲಸ ಮಾಡಬಲ್ಲವರಾಗಿದ್ದು, ಅವರ ವಿಭಾಗದ ಕುಶಲ ಮತ್ತು ಇತರೇ ಕೆಲಸಗಾರರ ಕೆಲಸವನ್ನು ನಿರ್ದೇಶಿಸಬಲ್ಲ ಸಾಮರ್ಥ್ಯವುಳ್ಳವರಾಗಿದ್ದು, ಆ ವಿಭಾಗದ ಕೆಲಸವನ್ನು ಸ್ವತಂತ್ರವಾಗಿ ನಿರ್ವಹಿಸಿಕೊಂಡು ಹೋಗಬಲ್ಲವರಾಗಿರಬೇಕು.

13. ಕುಶಲ : ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ, ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

14. ಅರೆ ಕುಶಲ : ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

15. ಕುಶಲರಲ್ಲದವರು : ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಆದರೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನ್ಯ ಜ್ಞಾನವಿರುವ ಕೆಲಸವನ್ನು ಮಾಡುವವರು.

ಯಾವುದೇ ಯಂತ್ರಗಳನ್ನು ನಡೆಸಲು ನೇಮಿಸಿರುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಾರದು. ಕಾವಲುಗಾರ, ಸಿಪಾಯಿ, ಚೌಕೀದಾರ, ಕಸ ಗುಡಿಸುವವರು, ಜಾಡಮಾಲಿ ಹಾಗೂ ಅದೇ ತರಹದ ಕೆಲಸ ಮಾಡುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಹುದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೧ |
|---|---|---|
| ***Part – IV-A*** | ***Bangalore, Wednesday, January 9, 2013 (Pushya 19, Shaka Varsha 1934)*** | ***No. 21*** |


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 24 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09–01–2013**

ಕರ್ನಾಟಕ ರಾಜ್ಯಾದ್ಯಂತ "**ಕನ್‌ಫೆಕ್ಷನರಿ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2–8–2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ "ಕನ್‌ಫೆಕ್ಷನರಿ" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ–1 | | ವಲಯ–2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| **1** | **2** | **3** | **4** | **5** | **6** |
| 1 | ಮ್ಯಾನೇಜರ್ | 240–00 | 6240–00 | 220–00 | 5720–00 |
| 2 | ಕನ್‌ಫೆಕ್ಷನರ್ | 210–90 | 5483–60 | 191–46 | 4978–20 |
| 3 | ಸಹಾಯಕ ಕನ್‌ಫೆಕ್ಷನರ್ | 200–50 | 5213–10 | 180–61 | 4695–90 |
| 4 | ಸಹಾಯಕರು [ಹೆಲ್ಪರ್] | | | | |
| 5 | ಮೇಲೆ ತಿಳಿಸದೇ ಇರುವ ಯಾವುದೇ ಕೆಲಸದಲ್ಲಿನ ವರ್ಗ | 189–56 | 4928–80 | 170–25 | 4426–60 |
| | **ಕಛೇರಿ ಸಿಬ್ಬಂದಿ** | | | | |
| 1 | ಮ್ಯಾನೇಜರ್/ಪರ್ಸನಲ್ ಆಫೀಸರ್ | 243–84 | 6339–00 | 224–61 | 5879–99 |
| 2 | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 235–00 | 6110–00 | 215–76 | 5610–00 |
| 3 | ಅಕೌಟೆಂಟ್ | 225–00 | 5850–00 | 205–76 | 5350–00 |
| 4 | ಕ್ಯಾಷಿಯರ್ | 220–00 | 5720–00 | 200–76 | 5220–00 |
| 5 | ಶೀಘ್ರಲಿಪಿಗಾರ/ಕಂಪ್ಯೂಟರ್ ಆಪರೇಟರ್ | | | | |
| 6 | ಸ್ಟೋರ್ ಕೀಪರ್ | | | | |
| 7 | ಬೆರಳಚ್ಚುಗಾರ/ಡಾಟಾಎಂಟ್ರಿ ಆಪರೇಟರ್ | 215–00 | 5590–00 | 195–76 | 5090–00 |
| 8 | ಗುಮಾಸ್ತ/ಕ್ಲರ್ಕ್ | | | | |
| 9 | ಆಫೀಸ್‌ಬಾಯ್/ಪ್ಯೂನ್/ವಾಚ್‌ಮನ್/ಅಟೆಂಡರ್ | 175–00 | 4550–00 | 170–00 | 4420–00 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು} \times \text{ತುಟ್ಟಿಭತ್ಯೆಯ ದರ} \times \text{30 ದಿನಗಳು}}{26} = \text{ತುಟ್ಟಿಭತ್ಯೆ.}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೨ |
|---|---|---|
| *Part – IV-A* | *Bangalore, Wednesday, January 9, 2013 (Pushya 19, Shaka Varsha 1934)* | *No. 22* |


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 25 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09–01–2013**

ಕರ್ನಾಟಕ ರಾಜ್ಯಾದ್ಯಂತ **"ಫಾರೆಸ್ಟರಿ ಅಂಡ್ ಟಿಂಬರಿಂಗ್"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2–8–2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ / ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ / ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ "ಫಾರೆಸ್ಟರಿ ಅಂಡ್ ಟಿಂಬರಿಂಗ್" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] [ಟೈಂ ರೇಟೆಡ್ ಕೆಲಸಗಾರರು] | |
|---|---|---|---|
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| **1** | **2** | **3** | **4** |
| | **ಕುಶಲ ಕೆಲಸಗಾರರು** | | |
| 1 | ಆಕ್ಸ್ ಮ್ಯಾನ್ | 220–00 | 5720–00 |
| 2 | ಸಾಯಲ್ಸ್ | | |
| 3 | ಗಾರೆಯವರು | | |
| 4 | ಮರಗೆಲಸದವರು | | |
| 5 | ದಿಮ್ಮಿಗಳನ್ನು ನದಿಯ ಮುಖೇನ ಸಾಗಿಸುವವರು | | |
| 6 | ಕಲ್ಲುಬಂಡೆ ಒಡೆಯುವವರು | | |
| 7 | ಮಾವುತರು | | |
| 8 | ಏಜೆಂಟ್ಸ್‌ಗಳು / ಸೂಪರ್‌ವೈಸರ್ / ಮೇಸ್ತ್ರಿಗಳು | | |
| 9 | ಕಂಟ್ರಾಕ್ಟರ್‌ಗಳು ನೇಮಿಸಿಕೊಂಡಿರುವ ಗುಮಾಸ್ತರು / ಬೆರಳಚ್ಚುಗಾರರು / ಡ್ರಾಫ್ಟ್‌ಮೆನ್‌ಗಳು [ಫಾರೆಸ್ಟರಿ ಮತ್ತು ಅಲ್ಲಿನ ಒಳಾಂಗಣ ಕೆಲಸಕ್ಕೆ ಸಂಬಂಧಿಸಿದಂತೆ] | | |
| **1** | **2** | **3** | **4** |
| | **ಅರೆಕುಶಲ ಕೆಲಸಗಾರರು** | | |
| 1 | ಬೊಂಬು, ಬೆತ್ತ ಮತ್ತು ರೀಡ್ಸ್ ಗಳನ್ನು ಕಲೆ ಹಾಕುವ ಸಂಬಂಧಪಟ್ಟ ಕೆಲಸಗಾರರು | 205–00 | 5330–00 |
| 2 | ಇದ್ದಿಲನ್ನು ಸುಡುವ ಸಂಬಂಧಪಟ್ಟ ಕೆಲಸಗಾರರು | | |
| 3 | ಡೈಯಿಂಗ್ ಆಫ್ ಡ್ರಾಗ್ ರೋಪ್ಸ್‌ಗೆ ಸಂಬಂಧಪಟ್ಟ ಕೆಲಸಗಾರರು | | |
| 4 | ಕಟ್ಟಿಗೆ ತುಂಬುವವರು ಮತ್ತು ಇಳಿಸುವವರು | | |
| 5 | ಚಿಸಲಿ ನಂಬರಿಂಗ್‌ಗೆ ಸಂಬಂಧಪಟ್ಟ ಕೆಲಸಗಾರರು | | |
| 6 | ರಾಫ್ಟ್ ಮೇಕಿಂಗ್‌ಗೆ ಸಂಬಂಧಪಟ್ಟ ಕೆಲಸಗಾರರು | | |
| 7 | ಮಾವುತರ ಸಹಾಯಕರು | | |

| ಕ್ರ ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] [ಟೈಂ ರೇಟೆಡ್ ಕೆಲಸಗಾರರು] | |
|---|---|---|---|
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 8 | ನೆಡುತೋಪು ಸಸಿ ನೆಡುವವರು. | | |
| 9 | ನೆಡುತೋಪುಗಳಲ್ಲಿ ಬೀಜ ಬಿತ್ತುವುದು / ನೆಡುವುದು. | | |
| 10 | ನರ್ಸರಿ ಕೆಲಸದಲ್ಲಿ ವಾಟರಿಂಗ್ ಕೆಲಸ ಹೊರತುಪಡಿಸಿ ಗ್ರೇಡಿಂಗ್ ಮಾಡುವವರು / ಶಿಪ್ಪಿಂಗ್ ಮಾಡುವವರು / ಸೋಯಿಂಗ್ ಮಾಡುವವರು / ಟ್ರಾನ್ಸ್‌ಪ್ಲಾಂಟಿಂಗ್ ಮಾಡುವವರು. | | |
| | **ಕುಶಲರಲ್ಲದ ಕೆಲಸಗಾರರು** | | |
| 1 | ಮಜ್ದೂರು, ವಾಚರ್ಸ್, ಫಾರೆಸ್ಟ್ ನರ್ಸರಿ ಮತ್ತು ಪ್ಲಾಂಟೇಷನ್‌ಗಳಲ್ಲಿ ಕೆಲಸ ಮಾಡುವವರು | 190–00 | 4940–00 |
| 2 | ಕಟ್ಟಿಗೆಯನ್ನು ತಲೆಯ ಮೇಲೆ ಹೊರುವಲ್ಲಿ ಸಂಬಂಧಪಟ್ಟ ಕೆಲಸಗಾರರು | | |
| 3 | ಬೌಂಡರಿ ಕ್ಲಿಯರಿಂಗ್ ಮತ್ತು ಫೈರ್ ಪ್ರೊಟೆಕ್ಷನ್ ಕೆಲಸಕ್ಕೆ ಸಂಬಂಧಪಟ್ಟ ಕೆಲಸಗಾರರು | | |
| 4 | ಅರ್ತ್ ವರ್ಕ್ [ಫಿಟ್ ಮೇಕಿಂಗ್ ಇತ್ಯಾದಿ] ಕೆಲಸಕ್ಕೆ ಸಂಬಂಧಪಟ್ಟ ಕೆಲಸಗಾರರು | | |
| 5 | ರಸ್ತೆ ಮಾಡುವವ [ಬಂಡೆ ಕಲ್ಲನ್ನು ಒಡೆಯುವವನನ್ನು ಹೊರತು ಪಡಿಸಿ] ಕೆಲಸಕ್ಕೆ ಸಂಬಂಧಪಟ್ಟ ಕೆಲಸಗಾರರು | | |
| 6 | ಕಂಟ್ರಾಕ್ಟರುಗಳು ನೇಮಿಸಿಕೊಂಡಿರುವ ಜವಾನರು/ವಾಚರ್‌ಗಳು ಮತ್ತು ಗುಡಿಸುವವರು [ಫಾರೆಸ್ಟರಿ ಮತ್ತು ಒಳಾಂಗಣ ಹಾಗೂ ಹೊರಾಂಗಣ ಕೆಲಸಕ್ಕೆ ಸಂಬಂಧಿಸಿದಂತೆ] | | |
| | **ವಾಹನ ಚಾಲಕರು** | | |
| 1 | ಲಾರಿ ಚಾಲಕರು | 220–00 | 5720–00 |
| 2 | ಜೀಪ್ ಮತ್ತು ಕಾರು ಚಾಲಕ | 200–00 | 5200–00 |
| | **ಸೂಚನೆ: ಮಾವುತರಿಗೆ ಕುಶಲ ಕೆಲಸಗಾರರಿಗೆ ನಿಗದಿಪಡಿಸಿರುವ ಕನಿಷ್ಟ ವೇತನದ ಶೇಕಡ 25 ರಷ್ಟನ್ನು ಹೆಚ್ಚುವರಿಯಾಗಿ ನೀಡುವುದು.** | | |
| **ಕ್ರ. ಸಂ.** | **ದಿಮ್ಮಿಯ ಘನ ಅಳತೆ** | **ದರ [ಪ್ರತಿ ಕ್ಯೂಬಿಕ್ ಮೀಟರ್‌ಗೆ]** | |
| **1** | ಬಿಡಿ ದರದ [ಫೀಸ್ ರೇಟ್] ಕೆಲಸಗಾರರು ಆಕ್ಸ್‌ಮನ್‌ಗಳಿಗೆ<br>[ಫೆಲ್ಲಿಂಗ್ ಮತ್ತು ಪ್ರಿಪರೇಷನ್ ಆಫ್ ಹಾರ್ಡ್‌ವುಡ್ ಅಥವಾ ಸಾಫ್ಟ್‌ವುಡ್]<br>ಅ. ಲಾಗ್ಸ್ ನಾಟ್ ಟು ಬಿ ಮಾರ್ಕ್‌ಡ್<br>1. ಅರ್ಧ ಕ್ಯೂಬಿಕ್ ಮೀಟರ್ ಮತ್ತು ಕಡಿಮೆ | 170–00 | |
| | ಅರ್ಧ ಕ್ಯೂಬಿಕ್ ಮೀಟರ್‌ಗಿಂತ ಹೆಚ್ಚು | 140–00 | |
| | ಆ. ಲಾಗ್ಸ್ ಟು ಬಿ ಮಾರ್ಕ್‌ಡ್<br>1. ಅರ್ಧ ಕ್ಯೂಬಿಕ್ ಮೀಟರ್ ಮತ್ತು ಕಡಿಮೆ | 186–00 | |
| | 2. ಅರ್ಧ ಕ್ಯೂಬಿಕ್ ಮೀಟರ್‌ಗಿಂತ ಹೆಚ್ಚು | 151–00 | |

| ಕ್ರ.ಸಂ. | ಕೆಲಸದ ವಿವರ | ಯೂನಿಟ್ | ಕನಿಷ್ಟ ಬಿಡಿ ದರ |
|---|---|---|---|
| | **ಫಾರೆಸ್ಟರಿ, ನರ್ಸರಿ ಮತ್ತು ಪ್ಲಾಂಟೇಷನ್ ಕೆಲಸಗಾರರು** | | |
| 1 | ಫಾರ್ಮೇಷನ್ ಆಫ್ ನರ್ಸರಿ ಬಿಡ್ ಫಾರ್ ಟೇಕ್ [ಬೊಂಬು ಕಲೆ ಹಾಕುವುದನ್ನು ಹೊರತುಪಡಿಸಿ] | ಸ್ಕ್ವೇರ್ ಮೀಟರ್‌ಗೆ | 120–00 |
| 2 | ಬೀಜಗಳನ್ನು ನರ್ಸರಿ ಬಿಡ್ ಗಳಲ್ಲಿ ಬಿತ್ತುವುದು. | ಸ್ಕ್ವೇರ್ ಮೀಟರ್‌ಗೆ | 115–00 |
| 3 | ಅಲೈನಿಂಗ್ ಮತ್ತು ಸ್ಟೇಕಿಂಗ್ [2m X 2m] | ಒಂದು ಸ್ಕ್ವೇರ್ ಹೆಕ್ಟೇರ್ | 355–00 |
| 4 | ಪುಲ್ಲಿಂಗ್ ಔಟ್ ಟೀಕ್ ಸೀಡ್ಲಿಂಗ್ [ಒಂದು ವರ್ಷದ ಸಸಿಗಳು ಮತ್ತು ಪ್ರಿಪರೇಷನ್ ಆಫ್ ಸ್ಟಮ್ಸ್ ಸಸಿಗಳು] | ಸ್ಟಮ್ಸ್ | 121–00 |
| 5 | ಪುಲ್ಲಿಂಗ್ ಔಟ್ ಟೀಕ್ ಸೀಡ್ಲಿಂಗ್ [ಎರಡು ವರ್ಷದ ಸಸಿಗಳು ಮತ್ತು ಪ್ರಿಪರೇಷನ್ ಆಫ್ ಸ್ಟಮ್ಸ್ ಸಸಿಗಳು] | 100 ಸ್ಟಮ್ಸ್ | 123–00 |
| 6 | ಟೀಕ್ ನೆಡುವುದು | | 122–00 |
| 7 | ಪ್ರಿಪರೇಷನ್ ಆಫ್ ಸೀಡ್ ನರ್ಸರಿ ಫಾರ್ ಯುಕಲಿಪ್ಟಸ್ | ಸ್ಕ್ವೇರ್ ಮೀಟರ್‌ಗೆ | 116–00 |

| ಕ್ರಸಂ. | ಕೆಲಸದ ವಿವರ | ಯೂನಿಟ್ | ಕನಿಷ್ಠ ಬಿಡಿ ದರ |
|---|---|---|---|
| 8 | ನೀಲಗಿರಿ ಸಸಿಗಳಿಗೆ ನೀರೆರೆಯುವುದು [ಪ್ರತಿ ಸ್ಕ್ವೇರ್ ಮೀಟರ್‌ಗೆ 30 ಲೀಟರ್‌ಗಳಂತೆ] | ಸ್ಕ್ವೇರ್ ಮೀಟರ್‌ಗೆ | 114–00 |
| 9 | ಕಲೆಕ್ಷನ್ ಆಫ್ ಸೀವಿಂಗ್ ಆಫ್ ಫಾರೆಸ್ಟ್ ಸಾಯಿಲ್ | ಪ್ರತಿ ಕ್ಯೂಬಿಕ್ ಮೀಟರ್ ಆಫ್ ಸಾಯಿಲ್ ಅಥವಾ 100 ಪಾಲಿಥಿನ್ ಬ್ಯಾಗ್‌ಗಳು | 184–00 |
| 10 | ಫಿಲ್ಲಿಂಗ್ ಪಾಲಿಥಿನ್ ಬ್ಯಾಗ್ಸ್ 12x18 cm, 100 ಗೇಜ್ ವಾಟರಿಂಗ್ ಫೆಸಿಲಿಟೀಸ್ ಪ್ಲಾಂಟಿಂಗ್ | 100 ಪಾಲಿಥಿನ್ ಬ್ಯಾಗ್‌ಗಳು | 123–00 |
| 11 | ಪುಲ್ಲಿಂಗ್ ಔಟ್ ಯೂಕಲಿಪ್ಟಸ್ ಸೀಡ್ಲಿಂಗ್ಸ್ ನರ್ಸರಿ ಬೆಡ್ ಮತ್ತು ಟ್ರಾನ್ಸ್ ಪ್ಲಾಂಟಿಂಗ್ ಇನ್ ಟು ಪಾಲಿಥಿನ್ ಬ್ಯಾಗ್ಸ್. | 100 ಸೀಡ್ಲಿಂಗ್ಸ್ | 117–00 |
| 12 | ಡಿಗ್ಗಿಂಗ್ ಪ್ಲಾಂಟಿಂಗ್ ಇನ್ ಆರ್ಡಿನರಿ ಫಾರೆಸ್ಟ್ ಸಾಯಿಲ್ ಅಪ್ಪರ್ ರೈನ್ಸ್ ಪಿಟ್ 25 : 25 : 25 ಸೆಂ.ಮಿ ಅಟ್ ಎ ಪ್ಲೇಸಿಂಗ್ಸ್ ಆಫ್ 2 1/2 x 2 1/2 ಮೀಟರ್‌ಗೆ | | 132–00 |
| 13 | ಡಿಗ್ಗಿಂಗ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 30 x 30 ಸೆಂ.ಮೀ. ಅಪ್ಪರ್ ರೈನ್ಸ್ | 100 ಪೀಟ್ಸ್ | 177–00 |
| 14 | ಡಿಗ್ಗಿಂಗ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 25 x 25 x 25 ಸೆಂ.ಮೀ. | 100 ಪೀಟ್ಸ್ | 165–00 |
| 15 | ಡಿಗ್ಗಿಂಗ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 30 x 30 x 30 ಸೆಂ.ಮೀ. ಡ್ಯೂರಿಂಗ್ ಡ್ರೈ ವೆದರ್ | 100 ಪೀಟ್ಸ್ | 228–00 |
| 16 | ಡಿಗ್ಗಿಂಗ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 25 x 25 x 25 ಸೆಂ.ಮೀ. ಅಪ್ಪರ್ ರೈನ್ಸ್ | 100 ಪೀಟ್ಸ್ | 145–00 |
| 17 | ಡಿಗ್ಗಿಂಗ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 30 x 30 x 30 ಸೆಂ.ಮೀ. ಅಪ್ಪರ್ ರೈನ್ಸ್ | 100 ಪೀಟ್ಸ್ | 171–00 |
| 18 | ಡಿಗ್ಗಿಂಗ್ ಫಿಟ್ಸ್ ಇನ್ ಕೌಲ್ಡರಿ ಸಾಯಿಲ್ ಆಫ್ ಡೈಮನ್‌ಷನ್ಸ್‌ನ 25 x 25 x 25 ಸೆಂ.ಮೀ. ಡ್ಯೂರಿಂಗ್ ಡ್ರೈ ವೆದರ್ | 100 ಪೀಟ್ಸ್ | 173–00 |
| 19 | ಡಿಗ್ಗಿಂಗ್ ಫಿಟ್ಸ್ ಇನ್ ಕೌಲ್ಡರಿ ಸಾಯಿಲ್ ಆಫ್ ಡೈಮನ್‌ಷನ್ಸ್‌ನ 30 x 30 x 30 ಸೆಂ.ಮೀ. ಡ್ಯೂರಿಂಗ್ ಡ್ರೈ ವೆದರ್ | 100 ಪೀಟ್ಸ್ | 267–00 |
| 20 | ಟ್ರಾನ್ಸ್ ಪೋರ್ಟ್ ಆಫ್ ಸೀಡ್ಲಿಂಗ್ಸ್ ಇನ್ ಪಾಲಿಥಿನ್ ಬ್ಯಾಗ್ಸ್ ಟು ಪ್ಲಾಂಟಿಂಗ್ ಸೈಟ್ಸ್ ಮತ್ತು ಡಿಸ್ಟ್ರಿಬ್ಯೂಷನ್ ಅಪ್ ಟು 500 ಮೀಟರ್ಸ್ | 100 ಸೀಡ್ಲಿಂಗ್ಸ್ | 117–00 |
| 21 | ಪ್ಲಾಂಟಿಂಗ್ ಬ್ಯಾಗ್ಸ್ ಸೀಡ್ಲಿಂಗ್ಸ್ | 100 ಪ್ಲಾಂಟ್ಸ್ | 121–00 |
| 22 | ಕವರಿಂಗ್ ಪ್ಲಾಂಟಿಂಗ್ಸ್ ಫಿಟ್ಸ್ ಆಫ್ ಡೈಮನ್‌ಷನ್ಸ್‌ನ 25 x 25 x 25 ಸೆಂ.ಮೀ. ಮತ್ತು ಡಿಗ್ಗಿಂಗ್ ಫಿಟ್ಸ್ ಹೋಲ್ಸ್ | 100 ಪೀಟ್ಸ್ | 126–00 |
| 23 | ಕ್ರಸಂ. 21 ಮತ್ತು 22 ಎರಡೂ ಕೆಲಸಗಳೂ ಸೇರಿ | 100 ಪ್ಲಾಂಟ್ಸ್ | 142–00 |
| 24 | ಅಲೈನಿಂಗ್ ಮತ್ತು ಸ್ಟೇಕಿಂಗ್ 2 1/2 x 2 1/2 ಮೀಟರ್‌ಗೆ | ಒಂದು ಹೆಕ್ಟೇರ್‌ಗೆ | 391–00 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

12. **ಕುಶಲ :** ಕುಶಲ ಕೆಲಸಗಾರರು ಅಂದರೆ ಸ್ವತಂತ್ರವಾಗಿ, ಪರಿಣಾಮಕಾರಿಯಾಗಿ ಮತ್ತು ಕೆಲಸವನ್ನು ಸರಿಯಾಗಿ ಮಾಡಬಲ್ಲ ಸಾಮರ್ಥ್ಯವುಳ್ಳ ಕಾರ್ಮಿಕ, ಅವಶ್ಯವಿದ್ದರೆ ಸರಳವಾದ ನಕ್ಷೆಗಳನ್ನು ಓದಿ, ಕೆಲಸ ಮಾಡುವ ಸಾಮರ್ಥ್ಯವುಳ್ಳವನಾಗಿರಬೇಕು.

13. **ಅರೆ ಕುಶಲ :** ತನ್ನ ಕಸುಬಿನ ಬಗ್ಗೆ ಸಾಕಷ್ಟು ಜ್ಞಾನವಿರುವ ಹಾಗೂ ಪುನರಾವರ್ತನೆ ಕೆಲಸ ಮಾಡುವ ಸಾಮರ್ಥ್ಯವುಳ್ಳ ಹಾಗೂ ಯಂತ್ರ ಉಪಕರಣಗಳ ಸಹಾಯದಿಂದ ಸರಳವಾದ ಕೆಲಸಗಳನ್ನು ಮಾಡಬಲ್ಲವರು.

14. **ಕುಶಲರಲ್ಲದವರು :** ಸ್ವತಂತ್ರವಾದ ನಿರ್ಣಯದ ಅವಶ್ಯಕತೆಯಿಲ್ಲದ ಅಥವಾ ಹಿಂದಿನ ಅನುಭವ ಇಲ್ಲದೆ ಆದರೆ ಉದ್ಯೋಗದ ವಾತಾವರಣದ ಪರಿಚಯವಿರುವ ಕೆಲಸ ಮಾಡುವುದು, ದೈಹಿಕ ಪರಿಶ್ರಮವಿಲ್ಲದೆ ವಿವಿಧ ರೀತಿಯ ವಸ್ತುಗಳು ಮತ್ತು ಸಾಮಾನ್ಯ ಜ್ಞಾನವಿರುವ ಕೆಲಸವನ್ನು ಮಾಡುವವರು.

ಯಾವುದೇ ಯಂತ್ರಗಳನ್ನು ನಡೆಸಲು ನೇಮಿಸಿರುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಾರದು. ಕಾವಲುಗಾರ, ಸಿಪಾಯಿ, ಚೌಕೀದಾರ, ಕಸ ಗುಡಿಸುವವರು, ಜಾಡಮಾಲಿ ಹಾಗೂ ಅದೇ ತರಹದ ಕೆಲಸ ಮಾಡುವ ಕಾರ್ಮಿಕರನ್ನು ಕುಶಲರಲ್ಲದ ವರ್ಗಕ್ಕೆ ಸೇರಿಸಬಹುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ

| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೩ |
|---|---|---|
| *Part – IV-A* | *Bangalore, Wednesday, January 9, 2013 (Pushya 19, Shaka Varsha 1934)* | *No. 23* |


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 26 ಎಲ್‌ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 09–01–2013**

ಕರ್ನಾಟಕ ರಾಜ್ಯಾದ್ಯಂತ **"ಅನುಸೂಚಿತ ಪಟ್ಟಿಗೆ ಸೇರದೆ ಇರುವಂತಹ ಉದ್ಯಮದಲ್ಲಿ ತೊಡಗಿರುವ ಕಾರ್ಮಿಕರಿಗೆ *[Unscheduled Employments]*"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 4–6–2011 ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದಾದ್ಯಂತ ಯಾವುದೇ **"ಅನುಸೂಚಿತ ಪಟ್ಟಿಗೆ ಸೇರದೆ ಇರುವಂತಹ ಉದ್ಯಮದಲ್ಲಿ ತೊಡಗಿರುವ ಕಾರ್ಮಿಕರಿಗೆ *[Unscheduled Employments]*"** ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ತಿಂಗಳಿಗೆ [ರೂಪಾಯಿಗಳಲ್ಲಿ] | |
|---|---|---|---|
| | | ದಿನಕ್ಕೆ | ತಿಂಗಳಿಗೆ |
| 1 | ಅತಿ ಕುಶಲರು | 225–00 | 5850–00 |
| 2 | ಕುಶಲರು | 215–00 | 5590–00 |
| 3 | ಅರೆ ಕುಶಲರು | 190–00 | 4940–00 |
| 4 | ಕುಶಲರಲ್ಲದವರು | 175–00 | 4550–00 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ – **IV-A** | **ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪)** | **ನಂ. ೨೪** |
| ***Part – IV-A*** | ***Bangalore, Wednesday, January 9, 2013 (Pushya 19, Shaka Varsha 1934)*** | ***No. 24*** |



**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 26 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09–01–2013**

ಕರ್ನಾಟಕ ರಾಜ್ಯಾದ್ಯಂತ "**ಚರ್ಮ ಹದ ಮಾಡುವ**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2–8–2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಟ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ "**ಚರ್ಮ ಹದ ಮಾಡುವ**" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] [ಟೈಂ ರೇಟೆಡ್ ಕೆಲಸಗಾರರು] ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
|---|---|---|---|
| 1 | 2 | 3 | 4 |
| | **ಭಾಗ – 1** **ಚರ್ಮ ಹದ ಸ್ಥಾನ – ಕ್ರೋಂ ಹದ** | | |
| 1 | ನೇರ ಮಾಡುವವರು [ಸ್ಕಡರ್] | 214–40 | 5574–40 |
| 2 | ಮೇಕ ಚರ್ಮ ಹರಿಯುವವ | | |
| 3 | ಸಹಾಯಕ | 203–60 | 5293–60 |
| 4 | ಪರಿಷ್ಕರಣೆ | | |
| | **ಹದ ಮಾಡುವ ಮತ್ತು ಬಣ್ಣ ವಿಭಾಗ** | | |
| 1 | ಕೂದಲು ಹೆರೆಯುವವ | 205–10 | 5332–60 |
| 2 | ಜೋಡಣೆ ಸಹಾಯಕರು [ಸ್ಯಾಮಿಂಗ್] | | |
| 3 | ಕೂದಲು ಹೆರೆತ ಅಭ್ಯಾಸಿಗಳು | | |
| 4 | ಸಹಾಯಕ | 198–60 | 5163–60 |
| 5 | ಡ್ರಂ ಹುಡುಗ | | |
| 6 | ಚರ್ಮ ಹೋಲು ಮಾಡುವವ | | |
| | **ಅಣಿಗೊಳಿಸುವ ವಿಭಾಗ [ಸೆಟ್ಟಿಂಗ್]** | | |
| 1 | ಅಣಿಯಂತ್ರ ಚಾಲಕ [ಆಪರೇಟರ್] | 204–30 | 5311–80 |
| 2 | ಸಹಾಯಕ | 198–60 | 5163–60 |
| 3 | ಕೈಯಿಂದ ಅಣಿ ಮಾಡುವವರು | | |
| | **ಪೇರಿಸುವ ವಿಭಾಗ** | | |
| 1 | ಸಹಾಯಕ | 188–60 | 4903–60 |
| 2 | ಜೋಡಿಸುವವರು | | |
| 3 | ರಾಶಿ ಕಟ್ಟುವವರು ಸೇರಿಸುವವರು | | |
| | **ಎಳೆದು ಹಿಗ್ಗಿಸುವ ವಿಭಾಗ** | | |
| 1 | ಸಹಾಯಕರು | 188–60 | 4903–60 |
| 2 | ಎಳೆದು ಹಿಗ್ಗಿಸುವವರು | | |
| | **ಪರಿಷ್ಕರಣ ವಿಭಾಗ** | | |
| 1 | ಸಹಾಯಕರು | 179–30 | 4661–80 |
| 2 | ಪಳಗಿಸುವವರು [ಸೀಜ್ವರ್ಸ್] | | |
| 3 | ಸಿಂಪಡಿಸುವವರು | | |
| | **ಪರಿಷ್ಕರಣ ಯಂತ್ರ ವಿಭಾಗ** | | |
| 1 | ಸಮ ಮಾಡುವ ಯಂತ್ರ ಚಾಲಕ/ಆಪರೇಟರ್ | 204–50 | 5317–00 |
| 2 | ಮರಳು ಸಾಣೆ ಚಕ್ರದ ಚಾಲಕ/ಆಪರೇಟರ್ | | |
| 3 | ಹೊಳಪು ಮಾಡುವ ಯಂತ್ರ ಚಾಲಕ [ಆಪರೇಟರ್ ಯಂತ್ರ ಚರ್ಮ] | | |
| 4 | ಅಂಚು ಓರಣ ಮಾಡುವವರು | | |
| 5 | ಒತ್ತು ಯಂತ್ರ ಚಾಲಕರು | | |
| 6 | ಇಸ್ತ್ರಿ ಯಂತ್ರ ಚಾಲಕರು | | |

| 1 | 2 | 3 | 4 |
|---|---|---|---|
| 7 | ಹಾಸುವವರು | | |
| 8 | ಹೊಳಪು ಯಂತ್ರ ಚಾಲಕರು [ಆಪರೇಟರ್] | | |
| 9 | ಸಹಾಯಕರು | 178–60 | 4643–60 |
| | **ಎರಕದ ವಿಭಾಗ** | | |
| 1 | ಚಾಲಕರು | 200–10 | 5202–60 |
| 2 | ಕಟ್ಟಡ ಕೆಲಸದವರು | | |
| 3 | ಬಡಗಿ | | |
| 4 | ಜೋಡಣೆಗಾರ [ಫಿಟ್ಟರ್] | | |
| 5 | ಅಣಿ ಮಾಡುವವರು | 189–30 | 4921–80 |
| 6 | ಸಹಾಯಕರು | 178–60 | 4643–60 |
| 7 | ಚಾಲಕ ಅಭ್ಯಾಸಿಗಳು | | |
| | **ಸಂಗ್ರಹಣೆ ಅಂಗಳದ ವಿಭಾಗ** | | |
| 1 | ಕೊರಡಿನ ಮೇಲೆ ಬಳೆ ಹಾಕುವವರು | 179–30 | 4661–80 |
| 2 | ಆಳ ಮಾಡುವವರು | | |
| | **ಸಾರ್ವತ್ರಿಕ ವಿಭಾಗ** | | |
| 1 | ಮೇಸ್ತ್ರಿಗಳು | 210–67 | 5477–60 |
| | **ಭಾಗ – 2**<br>**ಇತರೆ ಚರ್ಮ ಹದ ಸ್ಥಾನಗಳು [ಸಸ್ಯಜನಿಕ ಹದ ತೊಗಲು / ಚರ್ಮ]**<br>**ನೆನೆ ಹಾಕುವಿಕೆ** | | |
| 1 | ಒದ್ದೆ ಉಪ್ಪು ತೊಗಲುಗಳು | 165–70 [ಪ್ರತಿ ಯೂನಿಟ್‌ಗೆ] | |
| 2 | ಒಣ ತೊಗಲು | | |
| | **2. ಎಲ್ಯಾನ್ ಗ್ರಾಂ**<br>**[ಇ] ಮಾಂಸದ ಭಾಗ ತೆಗೆಯುವಿಕೆ** | | |
| 1 | ಗುಂಡಿಗಳಿಂದ ತೊಗಲು ತೆಗೆದ ತಕ್ಷಣ | 165–70 [ಪ್ರತಿ ಯೂನಿಟ್‌ಗೆ] | |
| 2 | ಸುಣ್ಣದ ಗುಂಡಿಗಳಿಂದ ತೊಗಲು ತೆಗೆದ ತಕ್ಷಣ | | |
| 3 | ಮಾರನೇ ದಿನ ಅಟ್ಟಿ ಚರ್ಮಕ್ಕಾಗಿ ತೊಗಲು ನಯ ಮಾಡುವುದು | | |
| 4 | ಅಟ್ಟಿ ಚರ್ಮಕ್ಕಾಗಿ ತೊಗಲು ನೇರ ಮಾಡುವಿಕೆ | | |
| | **ನೇರ ಮಾಡುವಿಕೆ** | | |
| 1 | ಮಾಂಸ ಭಾಗ ತೆಗೆದ ತಕ್ಷಣ ಮೇಲ್ಭಾಗ ನೇರ ಮಾಡುವಿಕೆ | 165–70 [ಪ್ರತಿ ಯೂನಿಟ್‌ಗೆ] | |
| 2 | ನೇರ ಮಾಡುವಿಕೆ [ಮಾರನೇ ದಿನ] | | |
| 3 | ಮಾಂಸದ ಭಾಗ ತೆಗೆಯದ ಮೇಲ್ಭಾಗ ನೇರ ಮಾಡುವಿಕೆ] | | |
| | **3. ಮೊಬ್ಬು**<br>**ಅ] ಮಾಂಸ ಭಾಗದ ಕಡೆ ತೊಗಲು ನೇರ ಮಾಡುವಿಕೆ**<br>**ಆ] ಮೈಂ ಚಾಲನ್ [ಅಳತೆ ಕೆಲಸ]** | | |
| 1 | ಮಾಂಸ ಭಾಗ ಕಡೆ ನೇರ ಮಾಡುವುದು | 165–70 [ಪ್ರತಿ ಯೂನಿಟ್‌ಗೆ] | |
| 2 | ಮೊದಲ ಸಲ ಮಾಂಸ ಭಾಗ ಕಡೆ ನೇರ ಮಾಡುವುದು [2ನೇ ಸಲ] | | |
| 3 | ನೇರ ಮಾಡಿದ ನಂತರ ತೊಗಲಿನ ಎರಡು ಕಡೆ ಎಣ್ಣೆ ಹಚ್ಚುವಿಕೆ ತೇವ ತೆಗೆಯಲು | | |

| 1 | 2 | 3 | 4 |
|---|---|---|---|
| | **4. ಹದ ಅಥವಾ ಅಣಿ** | | |
| 1 | ಮೊದಲು ಮೇಲ್ಭಾಗದಲ್ಲಿ ಮುದುರುಗಳನ್ನು ನಯ ಮಾಡುವುದು ಮತ್ತೆ ತೊಗಲನ್ನು ಸಮವಾಗಿ ಎಳೆದು ಹರಡುವುದು ನಂತರ ಹಿತ್ತಾಳೆಯ ಸಾಧನದಿಂದ ಮಾಂಸ ಭಾಗದಲ್ಲಿ ಉಳಿದಿರುವ ಮಾಂಸ ಹಾಗೂ ಹರಕು ನೊನೆಗಳನ್ನು ತೆಗೆದು ನಯ ಮಾಡುವುದು. | 165–70 [ಪ್ರತಿ ಯೂನಿಟ್‌ಗೆ] | |
| | **5. ತೊಟ್ಟಿ** | | |
| 1 | ಗುರ್ತಿನ ತೊಟ್ಟಿಗಳಿಂದ ಮತ್ತು ಅಳಲೇಕಾಯಿ ತೊಟ್ಟಿಗಳಿಂದ ದಿನವಹಿ ಚರ್ಮ ತೆಗೆಯುವಿಕೆ ಹಾಗೂ ಪುನ: ಇರುವ ಕೆಲಸ | 165–70 [ಪ್ರತಿ ಯೂನಿಟ್‌ಗೆ] | |
| | **ಭಾಗ – 3**<br>**ಚರ್ಮ ವಸ್ತು ತಯಾರಿಕೆ** | | |
| 1 | ಅ] ಚಪ್ಪಲಿಗಳು [ಸಾಮಾನ್ಯ] | 198–00 | 5148–00 |
| | ಆ] ಚಪ್ಪಲಿಗಳು [ವಿಶೇಷ ಕೋರಿಕೆಯಂತೆ ತಯಾರಿಸಿದ್ದು] | 177–80 | 4622–80 |
| 2 | ಅ] ಷೂಗಳು [ಸಾಮಾನ್ಯ] | 204–60 | 5319–60 |
| | ಆ] ಷೂಗಳು [ವಿಶೇಷ ಕೋರಿಕೆಯಂತೆ ತಯಾರಿಸಿದ್ದು] | 211–04 | 5496–40 |
| 3 | ಅ] ಪಂಪ್ ಷೂಗಳು [ಸಾಮಾನ್ಯ] | 200–20 | 5205–20 |
| | ಆ] ಪಂಪ್ ಷೂಗಳು [ವಿಶೇಷ ಕೋರಿಕೆಯಂತೆ ತಯಾರಿಸಿದ್ದು] | 205–63 | 5346–38 |
| 4 | ಅ] ಬೂಟುಗಳು [ಸಾಮಾನ್ಯ] | 211–00 | 5486–00 |
| | ಆ] ಬೂಟುಗಳು [ವಿಶೇಷ ಪೋಲೀಸ್ ಅಥವಾ ಮಿಲಿಟರಿ ಮಾದರಿ ಅಥವಾ ಕೋರಿಕೆ ಮೇರೆಗೆ ತಯಾರಿಸಿದ್ದು] | 221–50 | 5759–00 |
| | **ಕಛೇರಿ ಸಿಬ್ಬಂದಿ** | | |
| 1 | ಮ್ಯಾನೇಜರ್ / ಪರ್ಸನಲ್ ಆಫೀಸರ್ | 243–84 | 6339–00 |
| 2 | ಅಸಿಸ್ಟೆಂಟ್ ಮ್ಯಾನೇಜರ್ / ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 235–00 | 6110–00 |
| 3 | ಅಕೌಂಟೆಂಟ್ | 225–00 | 5850–00 |
| 4 | ಕ್ಯಾಷಿಯರ್ | 220–00 | 5720–00 |
| 5 | ಶೀಘ್ರಲಿಪಿಗಾರ / ಕಂಪ್ಯೂಟರ್ ಆಪರೇಟರ್ | | |
| 6 | ಸ್ಟೋರ್ ಕೀಪರ್ | | |
| 7 | ಬೆರಳಚ್ಚುಗಾರ / ಡಾಟಾಎಂಟ್ರಿ ಆಪರೇಟರ್ | 215–00 | 5590–00 |
| 8 | ಗುಮಾಸ್ತ / ಕ್ಲರ್ಕ್ | | |
| 9 | ಆಫೀಸ್‌ಬಾಯ್ / ಪ್ಯೂನ್ / ವಾಚ್‌ಮನ್ / ಅಟೆಂಡರ್ | 175–00 | 4550–00 |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೫ |
| ***Part – IV-A*** | ***Bangalore, Wednesday, January 9, 2013 (Pushya 19, Shaka Varsha 1934)*** | ***No. 25*** |


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 29 ಎಲ್‌ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09–01–2013**

ಕರ್ನಾಟಕ ರಾಜ್ಯಾದ್ಯಂತ "**ರೇಷ್ಮೆ [ಸೆರಿಕಲ್ಚರ್–1]**" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2–8–2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯದಾದ್ಯಂತ ಯಾವುದೇ "**ರೇಷ್ಮೆ [ಸೆರಿಕಲ್ಚರ್–1]**" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಠ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ – 1 | | ವಲಯ – 2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| **1** | **2** | **3** | **4** | **5** | **6** |
| | **1. ಬಿತ್ತನೆ ಕೋಠಿ** | | | | |
| 1 | ಮಿಶ್ರತಳಿ ಗೂಡುಗಳನ್ನು ಬೇರ್ಪಡಿಸುವುದು | 200–00 | 5200–00 | 195–00 | 5070–00 |
| 2 | ಲಿಂಗ ವರ್ಗೀಕರಣ ಕಾರ್ಯನಿರ್ವಾಹಕ | | | | |
| 3 | ಜೋಡಿ ಹೊಂದಿಸುವುದು | | | | |
| 4 | ಮೊಟ್ಟೆ ಮಾಡಿಸುವ ಕೆಲಸ | | | | |
| 5 | ಜೋಡಿ ಬೇರ್ಪಡಿಸುವಿಕೆ. ಮೊಟ್ಟೆ ಕಾಗದವನ್ನು ಶುದ್ಧವಾಗಿಡಲು ರಾಸಾಯನಿಕ ಶುಶ್ರೂಷೆ ಮಾಡುವವ | | | | |
| | **2. ಚಾಕಿ ಪೋಷಣೆಯ ಕಾರ್ಯ** | | | | |
| 1 | ಕೋಣೆಯನ್ನು ರೋಗ ನಿರೋಧಗೊಳಿಸುವುದು | 195–00 | 5070–00 | 190–00 | 4940–00 |
| 2 | ಜಾಂಸಿಂಗ್ ಹುಳುಗಳ ಪೋಷಣೆ ಮತ್ತು ರಾಸಾಯನಿಕ ದ್ರವ್ಯ ಉಣಿಸುವುದು | | | | |
| 3 | ರೂಪ ಕೊಡುವ ಸೂಕ್ಷ್ಮ ಕೆಲಸ [ಎರತ ಮಾಡುವುದು] | | | | |
| 4 | ಹುಳುಗಳನ್ನು ಜೋಲಿನ ತಟ್ಟೆಯಲ್ಲಿ ಸಾಕುವಿಕೆ ಹಾಗೂ ಸಂಗ್ರಹಣೆ | | | | |
| | **3. ಗೂಡು ಮಾರುಕಟ್ಟೆ** | | | | |
| 1 | ಮಾರುಕಟ್ಟೆಯಲ್ಲಿ ಗೂಡುಗಳಿರುವ ಬುಟ್ಟಿಯನ್ನು ಖಾಲಿ ಮಾಡುವುದು | 205–00 | 5330–00 | 200–00 | 5200–00 |
| 2 | ಹರಾಜಿನ ನಂತರ ಪುನ: ಬುಟ್ಟಿಗೆ ತುಂಬಿ ತೂಕ ಮಾಡುವ ಯಂತ್ರಕ್ಕೆ ಒಯ್ಯುವುದು | | | | |
| 3 | ತೂಕ ಮಾಡುವಿಕೆ/ಖಾಲಿ ಮಾಡುವಿಕೆ ಮತ್ತು ಭರ್ತಿ ಮಾಡುವಿಕೆ | | | | |
| 4 | ಇನ್ನಿತರೆ ಮೇಲೆ ಕಾಣಿಸುವಂತೆ ಹೋಲುವ ಕೆಲಸ | | | | |
| | **4. ರೇಷ್ಮೆ ಫಾರಂ / ಹಿಪ್ಪುನೇರಳೆ ತೋಟ** | | | | |
| | | ಖುಷ್ಕಿ ಜಮೀನು | | ತರೀ ಜಮೀನು | |
| 1 | ಗುಂಡಿ ತೋಡುವುದು/ಅಗೆಯುವುದು | 200–00 | 5200–00 | 195–00 | 5070–00 |
| 2 | ಉಳುವಿಕೆ | | | | |
| 3 | ಹೆಂಟೆ ಹೊಡೆಯುವ ಕಾರ್ಯ | | | | |
| 4 | ಗುಡ್ಡೆ ಮಾಡುವ ಕಾರ್ಯ | | | | |
| 5 | ಮಧ್ಯಂತರ ಸಾಗುವಿಕೆ | | | | |
| 6 | ಕಳೆ ಕೀಳುವುದು | 185–00 | 4810–00 | 180–00 | 4680–00 |
| 7 | ಎಲೆ ಬಿಡಿಸುವುದು | | | | |
| 8 | ಗೊಬ್ಬರ/ಕ್ರಿಮಿನಾಶಕ ಮಿಶ್ರಣ ಮಾಡುವುದು | 215–00 | 5590–00 | 205–00 | 5330–00 |
| 9 | ಗೊಬ್ಬರ ಮತ್ತು ರಾಸಾಯನಿಕಗಳ ಸಿಂಪಡಿಸುವಿಕೆ ಶುಶ್ರೂಷೆ | | | | |

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಟ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ – 1 | | ವಲಯ – 2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| 1 | 2 | 3 | 4 | 5 | 6 |
| | **5. ಸಸಿಗಳ ಪಾತಿ ಮಾಡುವಿಕೆ** | | | | |
| 1 | ಕಂಡಿ ಕತ್ತರಿಸುವುದು [ಪಾನ್ ಕಟಿಂಗ್] | 200–00 | 5200–00 | 195–00 | 5070–00 |
| 2 | ಸಸಿಗಳ ಪಾತಿ ಮಾಡುವುದು | | | | |
| 3 | ಡಿಡ್ಕಸ್ ಮತ್ತು ಪರೋಸ್ ಮಾಡುವಿಕೆ | | | | |
| 4 | ನೀರುಣಿಸುವಿಕೆ ವಿತರಣೆ | | | | |
| 5 | ಕಳೆ ಕೀಳುವುದು | | | | |
| 6 | ಇತರೆ ಕೆಲಸಗಳು | | | | |

**ತುಟ್ಟಿಭತ್ಯೆ:**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳನ್ನು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4284 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4284 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4.5 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಾಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ವೇತನದ ಮಾಸಿಕ ದರಗಳನ್ನು 26 ದಿನಗಳಿಂದ ವಿಭಾಗಿಸಿ, ನಾಲ್ಕು ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:**

ಅ] ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

ಆ] ದಿನಗೂಲಿ ವೇತನ ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ.ಪಿ.ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು = ತುಟ್ಟಿಭತ್ಯೆ.

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗದಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ವಲಯ-1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ-2 : ವಲಯ-1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ರಾಜ್ಯ ಪತ್ರಿಕೆ



| ಭಾಗ - IV-A | ಬೆಂಗಳೂರು, ಬುಧವಾರ, ಜನವರಿ ೯, ೨೦೧೩ (ಪುಷ್ಯ ೧೯, ಶಕ ವರ್ಷ ೧೯೩೪) | ನಂ. ೨೬ |
|---|---|---|
| ***Part - IV-A*** | ***Bangalore, Wednesday, January 9, 2013 (Pushya 19, Shaka Varsha 1934)*** | ***No. 26*** |



**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 31 ಎಲ್ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 09-01-2013**

ಕರ್ನಾಟಕ ರಾಜ್ಯಾದ್ಯಂತ "ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಮ್ ಮತ್ತು ಸ್ಟೀಲ್" ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು, ಸರ್ಕಾರದ ಕರಡು ಪ್ರಸ್ತಾವನೆಯನ್ನು ದಿನಾಂಕ: 2-8-2012ರ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಬಾಧಿತರಾಗುವ ವ್ಯಕ್ತಿಗಳು ಆಕ್ಷೇಪಣೆ/ಸಲಹೆಗಳನ್ನು ಸಲ್ಲಿಸಲು 2 ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ಅವಧಿಯಲ್ಲಿ ಯಾವುದೇ ಸಲಹೆ/ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಕರಡು ಪ್ರಸ್ತಾವನೆಯನ್ನು ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸರ್ಕಾರದ ಕರಡು ಅಧಿಸೂಚನೆಯ ಬಗ್ಗೆ ಮಂಡಳಿಯ ಸಭೆಯಲ್ಲಿ ಚರ್ಚಿಸಿದ್ದು, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948 (1948 ರ ಕೇಂದ್ರ ಅಧಿನಿಯಮ ಸಂಖ್ಯೆ: 11) ರ ಕಲಂ 5(1)(ಬಿ) ಮತ್ತು ಕಲಂ 3(1)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಂತ ಯಾವುದೇ "ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಮ್ ಮತ್ತು ಸ್ಟೀಲ್" ಉದ್ದಿಮೆಯ ಕೆಲಸದಲ್ಲಿ ತೊಡಗಿರುವ ವಿವಿಧ ವರ್ಗದ ಕಾರ್ಮಿಕರಿಗೆ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪರಿಷ್ಕರಿಸಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವರ್ಗಗಳು | ಕನಿಷ್ಟ ವೇತನ [₹ ಗಳಲ್ಲಿ] | | | |
|---|---|---|---|---|---|
| | | ವಲಯ - 1 | | ವಲಯ - 2 | |
| | | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ | ಪ್ರತಿ ತಿಂಗಳಿಗೆ |
| **1** | **2** | **3** | **4** | **5** | **6** |
| | **ಅತಿ ಕುಶಲ ಕಾರ್ಮಿಕರು** | | | | |
| 1 | ಮ್ಯಾನೇಜರ್ | 240-00 | 6240-00 | 220-76 | 5740-00 |
| 2 | ಫೋರ್‌ಮನ್ | 225-00 | 5850-00 | 205-76 | 5350-00 |
| 3 | ಟೆಕ್ನಿಕಲ್ ಸೂಪರ್‌ವೈಸರ್ | 215-00 | 5590-00 | 195-00 | 5070-00 |
| | **ಕುಶಲ ಕಾರ್ಮಿಕರು** | | | | |
| 1 | ಮೇಸ್ತ್ರಿ | 210-00 | 5460-00 | 195-00 | 5070-00 |
| 2 | ಮೆಷಿನಿಸ್ಟ್ | 200-00 | 5200-00 | 190-00 | 4940-00 |
| 3 | ಟರ್ನರ್ / ಟರ್ನರ್ ಡೈ ಪಾಲಿಷರ್ | | | | |

